ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್
ರಿಜಿಸ್ಟರ್ಡ್ ನಂ. ಕೆಆರ್ ಎನ್ ಎಸ್ — ೧೯
ಸಂಚಿಕೆ ೨೩ ಕೊಪ್ಪ ೨೩-೧-೧೯೮೩ ಭಾನುವಾರ ಬೆಲೆ ೪೦ ಪೈಸೆ



# ...ಪ್ಪ, ಶೃಂಗೇರಿಗಳಲ್ಲಿ ಬಳಕೆದಾರರ ಸಂಘಟನೆ ಬಗ್ಗೆ ಪ್ರಯತ್ನ

...: ಬಳಕೆದಾರರ ಸಂಘಟನೆ ಮ...ದ ಬಗ್ಗೆ ಹಾಗೂ ದಕ್ಷಿಣ ಕನ್ನ...ಲ್ಲಿ ಈಗ ಪ್ರಭಾವಿಯಾಗಿ ಬೆಳೆ...ವ ಬಳಕೆದಾರರ ಸಂಘಟನೆಗಳ ...ಚಟುವಟಿಕೆಗಳ ಬಗ್ಗೆ ಪರಿಚಯ ...ಡುವ ಕಾರ್ಯಕ್ರಮಗಳು ಜ. ...ು ಇಲ್ಲಿನ 'ಅಂಕುರ ಬಳಗ'ದ ಆಶ್ರ... ಹಾಗೂ ಶೃಂಗೇರಿಯಲ್ಲಿ 'ಫ್ಲಾಶ್ ...ಸಿಯೇಶನ್' ಆಶ್ರಯದಲ್ಲಿ ನಡೆದವು. ...ಡುಪಿ 'ಬಳಕೆದಾರರ ವೇದಿಕೆ'ಯ ...ಾಲಕರಾದ ಡಾ|| ರವೀಂದ್ರನಾಥ ಶಾ...ಗರು ಈ ಕಾರ್ಯಕ್ರಮಗಳನ್ನು ನಡೆ...ಟ್ಟರು.

...ಲ್ಲಿ ನೂರೈವತ್ತಕ್ಕೂ ಹೆಚ್ಚು ಜನ ...ರ್ಯಕ್ರಮದಲ್ಲಿ ಭಾಗವಹಿಸಿದ್ದರೆ, ಶೃಂ...ಯ ಸಭೆಗೆ ಸುಮಾರು ನೂರಿಪ್ಪತ್ತು ... ಬಂದಿದ್ದರು.

ನಾಗರೀಕರಿಗೆ ಕಾನೂನು ಬದ್ಧವಾಗಿ ...ರಕಬೇಕಾದ ಸರಕು, ಸೌಲಭ್ಯ ಅಥವಾ ಸೇವೆಗಳ ಪೂರೈಕೆಯಲ್ಲಿ ಅನ್ಯಾಯ–ಅಕ್ರಮಗಳಾದಾಗ ಅದರಿಂದ ನಾಗರೀಕರ (ಬಳ

(೪ನೇ ಪುಟಕ್ಕೆ)

## ಉತ್ತಮೇಶ್ವರ ಜಾತ್ರೆ

ಉತ್ತಮೇಶ್ವರ: ಇಲ್ಲಿ ಪ್ರತಿ ವರ್ಷದಂತೆ ... ೧೫ರಿಂದ ೧೯ರ ವರೆಗೆ ಉತ್ತಮೇಶ್ವರ ...ಸ್ವಾಮಿ ಜಾತ್ರೆ ನಡೆಯಿತು. ಅಮೃತೇಶ್ವರಿ ...ಮೇಳದವರ 'ಆಟ' ಇತ್ತು. ಸಾವಿರಾರು ಭಕ್ತಾದಿಗಳು ಐದು ದಿನಗಳ ಜಾತ್ರೆಯಲ್ಲಿ ಪಾಲ್ಗೊಂಡರು.

ಈ ಸಂದರ್ಭದಲ್ಲಿ ಯಾವುದೇ ಅಹಿತಕರ ಘಟನೆಗೆ ಅವಕಾಶವಿಲ್ಲದಂತೆ ಬಂದೋಬಸ್ತ್ ಏರ್ಪಡಿಸಿದ್ದ ಕೊಪ್ಪ ಪೋಲೀಸರಿಗೆ ರಥೋತ್ಸವ ಸಮಿತಿ ಹಾಗೂ ಗ್ರಾಮಪಂಚಾಯ್ತಿಯವರು ಅಭಿನಂದನೆ ಸಲ್ಲಿಸಿದ್ದಾರೆ.

## ಕೊಪ್ಪ ಚರ್ಚಿನಲ್ಲಿ ಸಂಭ್ರಮದ ವಾರ್ಷಿಕೋತ್ಸವ

ಕೊಪ್ಪ: ಇಲ್ಲಿನ ನಿತ್ಯಾಧಾರ ಮಾತೆಯ ದೇವಾಲಯ (ಚರ್ಚ್)ದಲ್ಲಿ ಜ.೧೮ ಮತ್ತು ೧೯ರಂದು ನಿತ್ಯಾಧಾರ ಮಾತೆಯ ವಾರ್ಷಿಕೋತ್ಸವ ನಡೆಯಿತು.

೧೮ರ ಸಂಜೆ ಪೇಟೆಯ ಬೀದಿಗಳಲ್ಲಿ ಆಕರ್ಷಕವಾದ ಮೆರವಣಿಗೆ ನಡೆಯಿತು. ೧೯ರಂದು ಚರ್ಚಿನಲ್ಲಿ ಪೂಜೆಗಳು ನಡೆದವು.

ಕೊಪ್ಪ ಕ್ಯಾಥೊಲಿಕ್ ಧರ್ಮ ಕೇಂದ್ರದ ವಿವಿಧ ಕಡೆಗಳಿಂದ ಸುಮಾರು ೪,೫೦೦ ಜನ ಉತ್ಸವದಲ್ಲಿ ಭಾಗವಹಿಸಿದ್ದರೆಂದು ತಿಳಿದು ಬಂದಿದೆ.

## 'ಬ್ಯಾಂಕರ್ ಮಾರ್ಗಯ್ಯ' ಚಿತ್ರೀಕರಣ ಆರಂಭ

**(ವರದಿ: ಹುಮನಾ)**

ಕೊಪ್ಪ: ಇಲ್ಲಿನ ಸುಭಾಷ್ ರಸ್ತೆಯಲ್ಲಿನ ಸೀತಮ್ಮ ಕಾಂಪೌಂಡ್ ಆವರಣದಲ್ಲಿ ಜ.೨೦ರಂದು ಕೋಮಲ್ ಪ್ರೊಡಕ್ಷನ್ಸ್‌ನವರ ಬ್ಯಾಂಕರ್ ಮಾರ್ಗಯ್ಯ ವರ್ಣ ಚಿತ್ರದ ಮುಹೂರ್ತ ನಡೆಯಿತು.

ಶೃಂಗೇರಿ ಕ್ಷೇತ್ರದ ನೂತನ ಶಾಸಕ ಹೆಚ್.ಜಿ.ಗೋವಿಂದ ಗೌಡ ಕ್ಲಾಪ್ ಮಾಡಿದರು. ಬೆಂಗಳೂರಿನ ವಿಶ್ವ ನ್ಯೂರೋ ಸರ್ಜನ್ ಡಾ|| ವರ್ಮಾ ಕ್ಯಾಮರಾ ಸ್ವಿಚ್ ಆನ್ ಮಾಡಿದರು.

## ಕೊಪ್ಪ ಪುರಸಭೆ: 'ಮುನ್ನಡೆ' ಯೋಜನೆಯ ಮುನ್ನಡೆ

ಕೊಪ್ಪ: ಪುರಸಭೆಗಳ ವ್ಯಾಪ್ತಿಯಲ್ಲಿರುವ ಸಣ್ಣ ಉದ್ಯಮಿಗಳಿಗೆ ಸಹಾಯ ನೀಡುವ 'ಮುನ್ನಡೆ' ಯೋಜನೆಯಂತೆ ಇಲ್ಲಿನ ಪುರಸಭೆ ಆಯ್ಕೆ ಮಾಡಿದ್ದ ೧೦೦ ಜನರ ಪೈಕಿ ಈವರೆಗೆ ೩೮ ಜನರಿಗೆ ಹಣ ಪಾವತಿ ಮಾಡಲಾಗಿದ್ದು, ಇತರ ೩೭ ಜನರಿಗೆ ಬಿಲ್ ಮಾಡಿ ಜಿಲ್ಲಾಧಿಕಾರಿಗಳ ಸಹಿಗಾಗಿ ಕಳಿಸಲಾಗಿದೆ.

ಮೈಸೂರು ಬ್ಯಾಂಕಿನಿಂದ ೭, ಇಂಡಿಯನ್ ಬ್ಯಾಂಕಿನಿಂದ ೧೪, ಡಿಸಿಸಿ ಮತ್ತು ಕರ್ನಾಟಕ ಬ್ಯಾಂಕುಗಳಿಂದ ತಲಾ ೨ ಜನರಿಗೆ ಇನ್ನೂ ಮಂಜೂರಾತಿ ಬರಬೇಕಾಗಿದೆ ಎಂದು ಮುಖ್ಯಾಧಿಕಾರಿ ಆರ್.ಗುಂಡೂರಾವ್ ತಿಳಿಸಿದ್ದಾರೆ.

ಹಣ ಪಾವತಿ ಮಾಡಿರುವ ಬ್ಯಾಂಕುಗಳು: ಸಿಂಡಿಕೇಟ್ ಬ್ಯಾಂಕ್ ೧೯, ಮೈಸೂರು ಬ್ಯಾಂಕ್ ೧೩, ಇಂಡಿಯನ್ ಬ್ಯಾಂಕ್ ೭.

ಪುರಸಭೆಯ ಅಭಿವೃದ್ಧಿ ಕಾಮಗಾರಿಗಳಿಗಾಗಿ ೧೯೮೨–೮೩ನೇ ಸಾಲಿಗೆ ಇನ್ನೂ ೫೦ ಸಾವಿರ ರೂ.ಗಳ ಗ್ರಾಂಟ್ ಬಂದಿದೆ.

ಈ ಮೊದಲು ಒಂದೂವರೆ ಲಕ್ಷ ರೂ.ಗಳ ಗ್ರಾಂಟ್ ಬಂದಿತ್ತು (ಅವರಲ್ಲಿ ೧ ಲಕ್ಷ ವಿಶೇಷ ಗ್ರಾಂಟ್) ಈ ಹಣವನ್ನು ನೀರು ಪೂರೈಕೆ, ಚರಂಡಿ ಹಾಗೂ ರಸ್ತೆಗಳಿಗಾಗಿ ಬಳಸಲು ಆದೇಶವಿದೆ. ಜಿಲ್ಲೆಯ ಎಲ್ಲಾ ಪುರಸಭೆಗಳಿಗೂ ಈ ಹೆಚ್ಚುವರಿ ಗ್ರಾಂಟ್ ಬಂದಿರುವುದಾಗಿ ತಿಳಿದು ಬಂದಿದೆ.

## ಕ್ಷೇತ್ರದ ನೂತನ ಶಾಸಕ ಹೆಚ್.ಜಿ.ಗೋವಿಂದ ಗೌಡರ ಜನಸಂಪರ್ಕ ಕಾರ್ಯಕ್ರಮ

ಕೊಪ್ಪ: ರಾಜ್ಯ ವಿಧಾನ ಸಭೆಯಲ್ಲಿ ಶೃಂಗೇರಿ ಕ್ಷೇತ್ರದ ವಿರೋಧ ಪಕ್ಷಗಳ "ಜೊಚ್ಚಲ ಕೂಸು" ಆಗಿರುವ ಹೆಚ್.ಜಿ. ಗೋವಿಂದ ಗೌಡರು ತಮ್ಮ ಕ್ಷೇತ್ರದಾದ್ಯಂತ ಜನ ಸಂಪರ್ಕ ಕಾರ್ಯಕ್ರಮ ನಡೆಸುತ್ತಿದ್ದಾರೆ.

ಹೆಚ್ಚು ಜನ ಸೇರಿರುವ ಕಡೆ ತಮ್ಮ ಭಾಷಣದ ಜೊತೆಗೆ ಸ್ಥಳೀಯ ಮುಖಂಡರು ಅಲ್ಲಿನ ಸಮಸ್ಯೆ–ಕುಂದು–ಕೊರತೆಗಳನ್ನು ಕುರಿತು ಭಾಷಣ ಮಾಡಲು ಅವಕಾಶ ಕಲ್ಪಿಸುವ ಅವರು, ಕಡಿಮೆ ಜನರಿದ್ದಲ್ಲಿ ಅವರೊಂದಿಗೆ ಕುಳಿತು ನೇರವಾಗಿ ಚರ್ಚಿಸುತ್ತಿದ್ದಾರೆಂದು ಅವರ ಕಾರ್ಯಕರ್ತರು ತಿಳಿಸಿದ್ದಾರೆ.

ಜನ ಸಾಮಾನ್ಯರು, ತಮ್ಮ ಕೆಲಸ ನೇರವಾಗಿ ಆಗದಿದ್ದಾಗ ಸ್ಥಳೀಯ ಕಾರ್ಯಕರ್ತರ ಮೂಲಕ ಸಂಬಂಧಪಟ್ಟ ಅಧಿಕಾರಿಗಳಿಗೆ ತಿಳಿಸಿ ಕೆಲಸ ಮಾಡಿಸಿಕೊಳ್ಳಬೇಕೆಂದೂ, ಆಗಲೂ ಆಗದಿದ್ದರೆ ತಮ್ಮ ಗಮನಕ್ಕೆ ತರಬೇಕೆಂದೂ ಅವರು ಜನರಿಗೆ ವಿನಂತಿ ಮಾಡುತ್ತಿರುವುದಾಗಿ ನಮ್ಮ ಪ್ರತಿನಿಧಿಗಳಿಂದ ಬಂದಿರುವ ವರದಿಗಳು ತಿಳಿಸಿವೆ.

## ಜ.೧೬ರ ಅಡಿಕೆ ಧಾರಣೆ

ಕೊಪ್ಪ: ಇಲ್ಲಿನ ಮಾಮ್ಕೋಸ್ ಶಾಖೆಯಲ್ಲಿ ಜ. ೧೬ರಂದು ನಡೆದ ಅಡಿಕೆ ವ್ಯಾಪಾರದಲ್ಲಿ ಬಂದ ದರಗಳು ಹೀಗಿವೆ:

ರಾಶಿ: ೧೮೫೦ — ೨೦೦೯.
ಸಿಪ್ಪೆಗೋಟು: ೬೯೦ — ೧೧೬೩.
ಗೊರಬಲು: ೪೭೨ — ೬೩೯.

ಈ ಶಾಖೆಯಲ್ಲಿ ಮುಂದಿನ ವ್ಯಾಪಾರ ೩೦-೧-೮೩ರ ಭಾನುವಾರ ನಡೆಯುತ್ತದೆ.

## ಬೇಗಾರು ವೈದ್ಯರ ಬಂಧನ, ಜಾಮೀನಿನ ಮೇಲೆ ಬಿಡುಗಡೆ

ಶೃಂಗೇರಿ: ಜ.೪ರಂದು ಬೇಗಾರಿನ ಸರ್ಕಾರಿ ಆಸ್ಪತ್ರೆಯಲ್ಲಿ ದಾಖಲಾಗಿದ್ದ ಲಕ್ಷ್ಮಿ ಎಂಬ ಗರ್ಭಿಣಿಯ ಮೇಲೆ ಅತ್ಯಾಚಾರದ ಹಲ್ಲೆ ನಡೆಸಿದ ಆರೋಪದ ಮೇಲೆ ಅಲ್ಲಿನ ವೈದ್ಯಾಧಿಕಾರಿ ಎ.ಜಿ.ಹೆಗ್ಡೆ ಅವರನ್ನು ಇಲ್ಲಿನ ಪೋಲೀಸರು ಬಂಧಿಸಿ ಜಾಮೀನಿನ ಮೇಲೆ ಬಿಡುಗಡೆ ಮಾಡಿರುವುದಾಗಿ ತಿಳಿದು ಬಂದಿದೆ.

ಕೊಪ್ಪದ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದು ಮನೆಗೆ ಹೋದ ಲಕ್ಷ್ಮಿ ಅನಂತರ ಜ.೧೫ರಂದು ಶಂಕಾಸ್ಪದ ರೀತಿಯಲ್ಲಿ ಮೃತಪಟ್ಟುದನ್ನು ಇಲ್ಲಿ ಸ್ಮರಿಸಬಹುದು.

ಕೊಪ್ಪ ಪೋಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಪಿ.ಸಿ.ಗಣಪತಿ ಅವರು ಈ ಪ್ರಕರಣದ ತನಿಖೆ ನಡೆಸುತ್ತಿದ್ದಾರೆ. ಮರಣೋತ್ತರ ಶವಪರೀಕ್ಷೆಯ ವರದಿ ಬಂದಿದೆಯಾದರೂ ಅದರಲ್ಲಿ ಸಾವಿನ ಕಾರಣ ಖಚಿತಪಡಿಸಿಲ್ಲವೆಂದು ಹೇಳಲಾಗಿದ್ದು, ಶವದ 'ವಿಸೆರಾ'ದ ರಾಸಾಯನಿಕ ಪರೀಕ್ಷೆಯ ವರದಿ ಬಂದ ನಂತರ ಅದನ್ನು ಆಧರಿಸಿ ಕಾರಣ ಖಚಿತಪಡಿಸಲಾಗುವುದೆಂದು ತಿಳಿದು ಬಂದಿದೆ.

## ಬಸರೀಕಟ್ಟೆಯಲ್ಲಿ ರಥೋತ್ಸವ

ಬಸರೀಕಟ್ಟೆ: ಇಲ್ಲಿನ ಜನಾರ್ದನಸ್ವಾಮಿ ರಥೋತ್ಸವ ಫೆ. ೨ರಂದು ನಡೆಯಲಿದೆ. ಈ ಸಂಬಂಧವಾಗಿ ಫೆ. ೧ರಿಂದ ೪ರ ವರೆಗೆ ವಿವಿಧ ಉತ್ಸವ, ಪೂಜೆ, ಜಾತ್ರೆಗಳು ನಡೆಯುತ್ತವೆ.

## ಶೃಂಗೇರಿ ಕಾಲೇಜಿನಲ್ಲಿ ನಡೆದ ಜಿಲ್ಲಾ ಹಾಗೂ ರಾಜ್ಯಮಟ್ಟದ ಸ್ಪರ್ಧೆಗಳು

ಶೃಂಗೇರಿ: ಇಲ್ಲಿನ ಜೆ.ಸಿ.ಬಿ.ಎಂ.ಕಾಲೇಜು ಆಶ್ರಯದಲ್ಲಿ ಈಚೆಗೆ ನಡೆದ ಜಿಲ್ಲಾ ಹಾಗೂ ರಾಜ್ಯ ಮಟ್ಟದ ವಿವಿಧ ಸ್ಪರ್ಧೆಗಳ ಫಲಿತಾಂಶಗಳು:

**ಪ್ರೊ|| ಎನ್.ಬಿ.ಎನ್.ಮೂರ್ತಿ ಸ್ಮಾರಕ ಜಿಲ್ಲಾ ಮಟ್ಟದ ಓಪನ್ ಬಾಲ್ ಬ್ಯಾಡ್ಮಿಂಟನ್ ಮತ್ತು ಥ್ರೋಬಾಲ್ ಪಂದ್ಯಾವಳಿ**
(ಜ. ೧೨ ಮತ್ತು ೧೩)

ಬಾಲ್ ಬ್ಯಾಡ್ಮಿಂಟನ್: ಕನ್ನಡ ಯುವಕ ಸಂಘ, ಬೀರೂರು—೧, ರಾಮಾಂಜನೇಯ ಕ್ಲಬ್, ಕುಂದೂರು—೨

ಥ್ರೋಬಾಲ್: ಜೆ.ಸಿ.ಬಿ.ಎಂ. ಕಾಲೇಜು, ಶೃಂಗೇರಿ—೧, ಸರ್ಕಾರಿ ಪ್ರೌಢಶಾಲೆ, ಶೃಂಗೇರಿ—೨.

**ರಾಜ್ಯ ಮಟ್ಟದ ಅಂತರ ಕಾಲೇಜು ಸಂಗೀತ ಸ್ಪರ್ಧೆ (ಜ ೧೭)**

ಸುರತ್ಕಲ್ಲಿನ ಗೋವಿಂದ ದಾಸ್ ಕಾಲೇಜು ಪರ್ಯಾಯ ಫಲಕ ಪಡೆಯಿತು. ಶೃಂಗೇರಿ ಕಾಲೇಜಿನ ಈ ಕೆಳಕಂಡವರು ವೈಯಕ್ತಿಕ ಬಹುಮಾನ ಪಡೆದರು— ಭಕ್ತಿಗೀತೆ: ಸಿ.ಕೆ.ಸುಮತಿ—೧, ಶಾಸ್ತ್ರೀಯ ಸಂಗೀತ: ರಾಜರಾಜೇಶ್ವರಿ—೧, ಭಾವಗೀತೆ: ವಿ.ಆರ್.ಭಾರತಿ—೩, ಚಿತ್ರಗೀತೆ: ಕೆ.ಟಿ. ವಾಣಿ—೩.

**ರಾಜ್ಯಮಟ್ಟದ ಚರ್ಚಾಸ್ಪರ್ಧೆ (ಜ.೨೦)**

ಶಿವಮೊಗ್ಗದ ನ್ಯಾಷನಲ್ ಕಾಮರ್ಸ್ ಕಾಲೇಜು ಪರ್ಯಾಯ ಫಲಕ ಪಡೆಯಿತು. ಶೃಂಗೇರಿ ಕಾಲೇಜಿನ [illegible] ಬಹುಮಾನ ಪಡೆದರು.

# ವೇದಿಕೆ

## ತೀರ್ಪು: ಯಾರ ಪರ, ಯಾರ ವಿರುದ್ಧ?

ಅನೇಕರನ್ನು ಸಂದರ್ಶಿಸಿ ವಿಮರ್ಶಿಸಿದಾಗ ಈ ಸಲದ ಚುನಾವಣೆಯಲ್ಲಿ ಜನ ನೀಡಿರುವ ತೀರ್ಪು ಯಾರ ಪರವೂ ಯಾರ ವಿರುದ್ಧವೂ ಆಗಿರದೆ ಇಡೀ ವ್ಯವಸ್ಥೆಯ ವಿರುದ್ಧವೇ ಎಂದು ನನಗೆ ಅನ್ನಿಸುತ್ತದೆ.

“ವಿರೋಧಿಗಳಿಗೆ ೫ ವರ್ಷ ಕೊಟ್ಟು, ಅವರು ಹೇಗೆ ಆಳುತ್ತಾರೆ ನೋಡೋಣ”; “ಲಂಚವಿಲ್ಲದೆ ಯಾವ ಕೆಲಸವೂ ಆಗುವುದಿಲ್ಲ. ಇವರಾದರೂ ಅದನ್ನು ನಿಲ್ಲಿಸುತ್ತಾರೋ ನೋಡೋಣ”; “ಗ್ರಾಮ ಪಂಚಾಯ್ತಿಯ ಹಾಗೂ ತಾ.ಅ.ಮಂಡಳಿಯ ಕೆಲವು ಸದಸ್ಯರು ‘ತುಂಡು ರಾಜ’ರಂತೆ ವರ್ತಿಸುತ್ತಾರೆ, ಅವರನ್ನೊಮ್ಮೆ ಕೆಳಗೆ ಇಳಿಸಿ ಬಿಡಬೇಕು” ಮುಂತಾದ ಅಭಿಪ್ರಾಯಗಳನ್ನು ಜನ ಮಾತಾಡಿಕೊಳ್ಳುತ್ತಿದ್ದಾರೆ.

ಇದು ವಿರೋಧ ಪಕ್ಷಗಳಿಗೆ ಒಂದು ಎಚ್ಚರಿಕೆ. ಹಾಗೆಯೇ ‘ನಾಳೆ ಬಾ’ ಎನ್ನುತ್ತ ‘ಮಾಮೂಲಿ’ ವಸೂಲು ಮಾಡುತ್ತ, ಕೆಲಸ ಮಾಡಿಕೊಡದೆ ಸತಾಯಿಸುವ ನೌಕರರಿಗೂ ಇದೊಂದು ಎಚ್ಚರಿಕೆಯೇ. ಮತದಾರ ಈ ಎಲ್ಲ ವ್ಯವಸ್ಥೆಯ ವಿರುದ್ಧ ಮತ ನೀಡಿದ್ದಾನೆಂದು ತಿಳಿಯಬೇಕು.

### ತುಂಡು ರಾಜರು

ತಮ್ಮ ಸ್ಥಾನಗಳನ್ನು ಉಳಿಸಿಕೊಳ್ಳಲು ಹಳ್ಳಿಗಳನ್ನು ಒಡೆದು ಗುಂಪುಗಾರಿಗೆ ನಡೆಸಿ ಆಳುತ್ತ, ‘ಚುನಾವಣೆ ಕಳೆಯಲಿ, ನಿಮ್ಮನ್ನು ನೋಡಿಕೊಳ್ಳುತ್ತೇನೆ’ ಮುಂತಾಗಿ ಬೆದರಿಕೆ ಹಾಕುವುದನ್ನು ಕಂಡಿದ್ದೇವೆ. ಕೆಲವು ಕಡೆಗಳಲ್ಲಿ ವಿರೋಧಿಗಳ ಪಟ್ಟಿಯನ್ನೂ ಮಾಡಿದ್ದರು. ಇಂಥ ತುಂಡು ರಾಜರು ಈಗಿನ ಫಲಿತಾಂಶದಿಂದ ಧೃತಿಗೆಟ್ಟಿದ್ದಾರೆ.

ಅವರೆಲ್ಲ ಜನರ ತೀರ್ಪನ್ನು ವಿಶಾಲ ದೃಷ್ಟಿಯಿಂದ ನೋಡಿ, ಪ್ರತೀಕಾರಕ್ಕೆ ಹೋಗದೆ ಪ್ರಾಮಾಣಿಕವಾಗಿ ಕೆಲಸ ಮಾಡಲಿ. ಈ ಚುನಾವಣೆಯಲ್ಲಿ ಪಕ್ಷಾಂತರಿಗಳನ್ನು ಸಹ ಜನ ಮಣ್ಣಿಗೆ ಎಸೆದಿದ್ದಾರೆ.

ಒಟ್ಟಾರೆ ಜನರ ಈ ತೀರ್ಪು ಯಾರ್ಯಾರ ವಿರುದ್ಧ ಹಾಗೂ ಎಂಥ ವ್ಯವಸ್ಥೆಯ ಪರ ಎಂಬುದನ್ನು ಅವರವರೇ ಆತ್ಮ ವಿಮರ್ಶೆ ಮಾಡಿಕೊಳ್ಳಲಿ.

**—ಹೆಗ್ಗಾರು ಜಯಂತ್.**

## “ಯಾರಿಗೆ ಬೇಕು ಈ ಪ್ರಜಾಪ್ರಭುತ್ವ?”

ಚುನಾವಣೆ ಬರುವುದೇ ತಡ, ಹಲವು ರೀತಿಯ ಜನ ಹಲವು ವೇಷ ಧರಿಸಿ ಹಳ್ಳಿ ಹಳ್ಳಿ ಸುತ್ತುತ್ತಾರೆ. ಮುಗ್ಧ ಮತದಾರರನ್ನು ಬಲೆಗೆ ಬೀಳಿಸಿಕೊಂಡೆವೆಂಬ ನಂಬಿಕೆಯಿಂದ ಮುಂದೆ ಹೋಗುತ್ತಾರೆ.

ಸರಿ, ಹೇಗೊ ಏನೋ, ಬೋರೇಗೌಡ ಬೆಂಗಳೂರು ತಲುಪಿದ್ದಾಯಿತು. ಮುಂದಿನ ಕಥೆ ಪರದೆಯ ಮೇಲೆ ನೋಡಬೇಕು.

ನೀತಿಗೆಟ್ಟ ರಾಜಕಾರಣಿಗಳಿಂದ ಭಾರತ ತುಕ್ಕು ಹಿಡಿದಿದೆ. ಸಹೃದಯಿಗಳಾದ ನಮ್ಮ ಜನರನ್ನು ಶ್ರೀಮಂತ ಬಡವ ಮುಂತಾದ ವರ್ಗಗಳಾಗಿಯೂ, ಜಾತಿ, ಭಾಷೆ ಮುಂತಾದ ದ್ವೇಷ ಭಾವನೆಯಿಂದಲೂ, ಕಾರ್ಮಿಕ ಸಂಘ, ರೈತ ಸಂಘ ಮುಂತಾದ ಬಗೆ ಬಗೆಯ ಸಂಘಗಳಿಂದಲೂ ಒಡೆದಿದ್ದಾರೆ. ಆದರೆ, ಈಗ ರೈತ ಸಂಘದ ಎಷ್ಟೋ ನಾಯಕರು ಶಾಸಕರಾಗಿದ್ದಾರೆ, ಮಂತ್ರಿಗಳೂ ಆಗಬಹುದು. ಇವರು ರೈತರಿಗೆ ನೀಡಿರುವ ಆಶ್ವಾಸನೆಗಳನ್ನು ಕಾರ್ಯರೂಪಕ್ಕೆ ತರುವರೆ ಅಥವಾ ಒಣ ಆಶ್ವಾಸನೆಯೆ?

ಮುಗ್ಧ ಮತದಾರರನ್ನು ವಂಚಿಸುವಲ್ಲಿ ಎಲ್ಲಾ ಪಕ್ಷಗಳ ಧುರೀಣರೂ ನುರಿತಿದ್ದಾರೆ. ಎಷ್ಟೋ ಜನ ಚುನಾವಣಾ ಪ್ರಚಾರಕರು ಹಣ-ಹೆಂಡದ ಬಲೆಯಲ್ಲಿ ಬಿದ್ದು ಏನು ಮಾಡುತ್ತಿದ್ದರೆಂಬುದು ಅವರಿಗೇ ಗೊತ್ತಿರಲಿಲ್ಲ. ರಾಷ್ಟ್ರನಾಯಕರು, ವಿಶ್ವನಾಯಕರುಗಳ ಭಾವ ಚಿತ್ರಗಳಿಗೆಲ್ಲ ಸಗಣಿ ಬಳಿಯುವ ಚತುರರು ನಮ್ಮ ರಾಜಕಾರಣಿಗಳ ಬಾಲ ಬಡುಕರು.

ನಮಗೆ ಸ್ವಾತಂತ್ರ್ಯದ ದಾಹ ಅತಿಯಾಗಿದೆ. ಇದರಿಂದ ದೇಶಕ್ಕೆ ದುರಂತ ತಪ್ಪಿದ್ದಲ್ಲ.

**—ಜಗದೀಶ್ ಮೊಗ, ಅತ್ತಿಸರು.**

## ವಿನಾಶದ ಬೀಜ ಹುಸಿಹೋಗಲಿ

ಸ್ವಾಮಿ,

೩೫ ವರ್ಷಗಳ ನಂತರ ನಮ್ಮ ರಾಜ್ಯದಲ್ಲಿ ಜನತಾ ಜನಾರ್ದನ ತನ್ನ ಅನುಗ್ರಹವನ್ನು ಸ್ವಲ್ಪ ಬೇರೆ ಕಡೆ ತಿರುಗಿಸಿದ್ದಾನೆ. ಇದೀಗ ಹೊಸ ವ್ಯವಸ್ಥೆಯೊಂದರ ಬೀಜಾರೋಪಣವಾಗಿದೆಯೇನೋ ನಿಜ. ಆದರೆ ಸಂವಿಧಾನ ಬದ್ಧವಾಗಿ ನಡೆದ ಹೊಸ ನಾಯಕನ ಆಯ್ಕೆಯ ಬಗ್ಗೆ ಅಪಸ್ವರ, ಹಿಂಬಾಲಕರ ಹಿಡಿತದಲ್ಲಿ ಸಿಕ್ಕಿಕೊಂಡ ಪುಂಡಾಳು ಒಬ್ಬರ ಹಗರಣದ ವರ್ತನೆಗಳನ್ನು ಕಂಡಾಗ ಈ ಹೊಸ ವ್ಯವಸ್ಥೆಯೊಂದಿಗೇ ಅದರ ವಿನಾಶದ ಬೀಜವನ್ನೂ ಬಿತ್ತುವ ಪ್ರಯತ್ನ ಶ್ರೀಸಾಮಾನ್ಯನಿಗೆ ದಿಗ್ಭ್ರಮೆ ಹಿಡಿಸಿದೆ. ಇಂತಹ ವಿನಾಶದ ಬೀಜ ಮೊಳಕೆಯೊಡೆಯಲು ಬಿಡಬಾರದು.

ಜನಸಾಮಾನ್ಯರು ಕಚೇರಿಗೆ, ಅಧಿಕಾರಿಯ ಬಳಿಗೆ ಹೋದಾಗ ತಾತ್ಸಾರದಿಂದ ಕಾಣಲ್ಪಡುವ ಕೆಟ್ಟ ಸಂಪ್ರದಾಯ ತಪ್ಪಬೇಕು. ಕಚೇರಿಗೆ ಪದೇ ಪದೇ ಅಲೆದು, ಕಂಬ ಸುತ್ತಿ, ಚಾಚುವ ಕೈಗಳಲ್ಲಿ ಸಾಕಷ್ಟು ಬೆಚ್ಚಗೆ ಮಾಡಿಯೂ ಸಮಸ್ಯೆಗೆ ಪರಿಹಾರ ಕಾಣದೇ ಕಂಗಾಲಾಗುವ ಪರಿಸ್ಥಿತಿ ಬದಲಾಗಬೇಕು. ಈಗಾಗಲೇ ಘೋಷಿಸಿಕೊಂಡಂತೆ ಮಂತ್ರಿ-ಶಾಸಕರು ಆಡಂಬರ ಬಿಟ್ಟು ಜೀವಿಸಬೇಕು. ಇಂತಹ ಸಾಮಾನ್ಯ ಕ್ರಮಗಳೇ, ವ್ಯವಸ್ಥೆಯಲ್ಲಿ ಬದಲಾವಣೆ ಆಗಿದೆಯೆಂಬ ಅನುಭವವನ್ನು ಜನರಿಗೆ ಉಂಟುಮಾಡಿ ಅವರ ಮನದ ಆಳಕ್ಕೆ ಇಳಿಯುತ್ತವೆ. ಅವರ ಬೆಂಬಲವೇ ಈ ವಿನಾಶದ ಬೀಜ ಹುಸಿಯುವಂತೆ ಮಾಡುತ್ತದೆ.

—ಹರಿಹರಪುರ **ಬಿ.ಸುಬ್ರಮಣ್ಯಂ,**
ಬೆಂಗಳೂರು.

## “ಭಾರತದ ರಾಜಕೀಯ”

ಅದ್ಭುತವು ಭಾರತದ ರಾಜಕೀಯ ಕ್ಷೇತ್ರ!
ಪುಢಾರಿ-ಪುಂಡರದ್ದೇ ಇಲ್ಲಿ ಪ್ರಧಾನ ಪಾತ್ರ
ಸದ್ಗುಣಿಗಳಿಹರಿಲ್ಲಿ ಬೆರಳೆಣಿಸುವಷ್ಟು
ಹೀಗಾಗಿ–ನ್ಯಾಯಕ್ಕೆ,ಧರ್ಮಕ್ಕೆ ಖೂಷ್ಟು.

**—‘ವಿಜಯಾಗ್ರಜ’**

### ನಮ್ಮ ಏಜೆಂಟರು

**ಬೊಮ್ಲಾಪುರ:** ಶ್ರೀ ಬಿ.ಬಿ.ಗೋಪಾಲಕೃಷ್ಣ, ಬೊಮ್ಲಾಪುರ.

**ಹಾಲ್ಮುತ್ತೂರು:** ಶ್ರೀ ಹುಲುಕೋಡು ಸುಬ್ರಮಣ್ಯ, ಹಾಲ್ಮುತ್ತೂರು.



## ಅನುಕೂಲಸ್ಥರಿಗೂ ಉಚಿತ ನಿವೇಶನ!

ಮಾನ್ಯರೆ,

ಭೂರಹಿತರು ಹಾಗೂ ಹರಿಜನ ಗಿರಿಜನರಿಗೆ ಮನೆಯ ನಿವೇಶನಗಳನ್ನು ಮುಫತ್ತಾಗಿ ಕೊಡುವಂತೆ ಸರ್ಕಾರದ ಆದೇಶವಿರುವುದು ಸರಿಯಷ್ಟೆ. ಆದರೆ ನಮ್ಮ ಗ್ರಾಮದಲ್ಲಿ ಅರ್ಜಿ ಕೊಟ್ಟಿರುವ ಹಾಗೂ ಕೊಡದಿರುವ ಹಲವಾರು ಹರಿಜನ ಗಿರಿಜನರು ಇದ್ದಾಗ್ಯೂ ಅವರನ್ನು ಪರಿಗಣಿಸದೆ ತರಿ-ಬಾಗಾಯ್ತು ಜಮೀನು ಹಾಗೂ ೫೦ಸಾವಿರ ರೂ. ಬೆಲೆ ಬಾಳುವ ಮನೆ ಎಲ್ಲ ಇರುವವರಿಗೆ ಮೇಲ್ಕಂಡ ನಿವೇಶನ ಮಂಜೂರಾಗಿದೆ. ಅಲ್ಲದೆ ೫-೧೦ ಎಕರೆ ಜಮೀನು ಹೊಂದಿರುವ ಅನುಕೂಲಸ್ಥರ ಮಕ್ಕಳ ಹೆಸರಲ್ಲೂ ಮಂಜೂರಾಗಿದೆ. ಇದರಿಂದಾಗಿ, ಸರ್ಕಾರದಿಂದ ಬಡವರಿಗಾಗಿ ಇರುವ ಸವಲತ್ತುಗಳು ಅನರ್ಹರಿಗೆ, ಶ್ರೀಮಂತರಿಗೆ ದೊರಕುವಂತಾಗಿದೆ. ಸಂಬಂಧಪಟ್ಟ ಸರ್ಕಾರಿ ಅಧಿಕಾರಿಗಳ ಗಮನಕ್ಕೂ ಈ ವಿಷಯ ತಂದಿದ್ದು, ಅವರು ಬೇಗನೇ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಒತ್ತಾಯಿಸುತ್ತೇನೆ.

**—ಹೆಚ್.ಎಸ್.ದಾಸಪ್ಪ,**
ಹಾಲ್ಮುತ್ತೂರು.

### ತಹಸೀಲ್ದಾರರ ಉತ್ತರ

[ಮೇಲ್ಕಂಡ ದೂರಿನ ಬಗ್ಗೆ ಕೊಪ್ಪ ತಹಸೀಲ್ದಾರರು ಈ ಕೆಳಗಿನಂತೆ ಉತ್ತರಿಸಿದ್ದಾರೆ. **—ಸಂ.**]

(೧) ಶ್ರೀಯುತ ದಾಸಪ್ಪನವರು ಆಪಾದಿಸಿರುವಂತೆ, ನಿವೇಶನ ಮಂಜೂರು ದಾರರ ಪಟ್ಟಿಯಲ್ಲಿ ಅಂಥವರ ಹೆಸರನ್ನು ಗುರುತಿಸಿ ಕೊಟ್ಟರೆ, ಅದನ್ನು ತೆಗೆದು ಹಾಕಲಾಗುವುದು, ಹಾಗೂ ತಪ್ಪಿತಸ್ಥ ನೌಕರರ ವಿರುದ್ಧ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು.

(೨) ಸ್ವಂತ ಜಮೀನು ಹೊಂದಿದ್ದರೂ ಮನೆ-ನಿವೇಶನ ಇಲ್ಲದವರಿಗೆ ನಿಗದಿತ ಬೆಲೆ ಕಟ್ಟಿಸಿಕೊಂಡು ೨ ಗುಂಟೆವರೆಗೆ ನಿವೇಶನ ಮಂಜೂರು ಮಾಡಲಾಗುವುದು. (ಇಂಥ ಯಾವುದಾದರೂ ಪ್ರಕರಣವನ್ನು [illegible]ವರು ತಪ್ಪಾಗಿ ಅರ್ಥಮಾಡಿಕೊಂಡಿದ್ದಾರೆಯೆ?)

(೩) ಸದರಿಯವರೂ ಉಚಿತ ನಿವೇಶನ ಪಡೆಯಲು ಅರ್ಹರಾಗಿದ್ದಲ್ಲಿ ಅವರ ಅರ್ಜಿ ಪಡೆದು ಅವರಿಗೂ ಮಂಜೂರು ಮಾಡಬಹುದಾಗಿರುತ್ತೆ.


‘ಮುಂಜಾವು’
**ಚಂದಾ ದರ:** ಆಜೀವ ಚಂದಾ ೨೦೦ರೂ.
ವಾರ್ಷಿಕ ಚಂದಾ ೨೦ರೂ.

# ಟೀಕೆ

ಕಾಂಗ್ರೆಸ್ (ಐ)ನ ಜವಾಬ್ದಾರಿಯುತ ಕಾರ್ಯಕರ್ತರಾಗಿರುವ ಗೆಳೆಯರೊಬ್ಬರ ಹತ್ತಿರ ಮೊನ್ನೆ ಜೇ.ಗಾನೆ ರಾಮಯ್ಯನವರ ಸೋಲಿನ ಕಾರಣದ ಬಗ್ಗೆ ವಿಚಾರಿಸಿದೆ. ಅವರ ಮಾತಿನ ಸಾರಾಂಶ ಇಷ್ಟು: ಬಡ ಜನರ ಹಾಗೂ ಜನ ಸಾಮಾನ್ಯರ ಏಳಿಗೆಯ ಕಾರ್ಯಕ್ರಮಗಳು ನ್ಯಾಯವಾಗಿಯೇ ಜಾರಿಗೆ ಬಂದಿದ್ದವು. ಆದರೆ ಅವು ನಿಜವಾದ ಅರ್ಹರಿಗೆ ಸಾಕಷ್ಟು ಸರಿಯಾಗಿ ತಲುಪಲಿಲ್ಲ. ಇದು ಮಂತ್ರಿಗಳಿಗೆ ಗೊತ್ತಾಗಲೇ ಇಲ್ಲ. ಪತ್ರಿಕೆಗಳು ಈ ಕುರಿತು ಬೇಕಾದಷ್ಟು ಬರೆದವು, ನಿಜ. ಆದರೆ ಪತ್ರಿಕೆಗಳಿಗೆ ಯಾರು ಸರಿಯಾಗಿ 'ಕೇರ್' ಮಾಡುತ್ತಾರೆ?....

ಅವರು ಹೇಳುವುದರಲ್ಲೂ ಸತ್ಯ ಇದೆ. ಏಕೆಂದರೆ ಬರೀ ನಮ್ಮ ಜಿಲ್ಲೆಯಲ್ಲೇ ಹತ್ತಕ್ಕೂ ಹೆಚ್ಚು ಪತ್ರಿಕೆಗಳಿವೆ. ಎಲ್ಲವೂ ಬೆಳಕಿಗೆ ತರುವ ಸಮಸ್ಯೆಗಳು ಹತ್ತಾರು. ಅವನ್ನು ನಿವಾರಿಸಲು ಸ್ಥಳೀಯ ಮುಖಂಡರು ಕೆಲಸ ಮಾಡದಿದ್ದರೂ ಅವರು ಮಂತ್ರಿಗಳ ಜೊತೆ ತಿರುಗಿದಾಗ ಜನರ ಅಸಮಾಧಾನ ಮಂತ್ರಿಗಳ ಮೇಲೇ ತಿರುಗುತ್ತದೆ. ಆದರೆ ಮಂತ್ರಿಗಳಿಗೆ ಎಲ್ಲಾ ಪತ್ರಿಕೆಗಳನ್ನೂ ಎಡೆಬಿಡದೆ ಗಮನಿಸಲು ಸಮಯ ಸಾಲುವುದಿಲ್ಲ. ಆಗ ಪತ್ರಿಕಾ ವರದಿಗಳನ್ನ ಅವರ ಗಮನಕ್ಕೆ ತರುವುದು ಸ್ಥಳೀಯ ಕಾರ್ಯಕರ್ತರ ಜವಾಬ್ದಾರಿಯಾಗಬೇಕಿತ್ತು.

ಆದರೆ ಇಲ್ಲಿನ ಹಿರಿಯ ಕಾಂಗ್ರೆ ನಮುಂದಾಳೊಬ್ಬರು ಹಿಂದೊಮ್ಮೆ, "ಅಂಥದನ್ನೆಲ್ಲ (ತಮ್ಮನ್ನು ಟೀಕಿಸಿದ ಪತ್ರಿಕಾ ವರದಿಗಳನ್ನು) 'ನೆಗ್ಲೆಕ್ಟ್' ಮಾಡಿದರಾಯಿತು" ಎಂದುದನ್ನು ಕೇಳಿದ್ದೇನೆ. 'ಸುಳ್ಳು ಬರೆದರೆ' ಎಂಬುದು ಅವರ ಅಭಿಪ್ರಾಯವಾಗಿರಬಹುದು. ಆದರೆ ಪತ್ರಿಕೆಗಳು ಬರೆದದ್ದೆಲ್ಲ ಸುಳ್ಳಾಗಿರಲಿಲ್ಲ ಎಂಬುದು ಈ ಚುನಾವಣೆಯ ಫಲಿತಾಂಶದಿಂದ ಸ್ವಲ್ಪವಾದರೂ ಅರ್ಥವಾದೀತು. ಜನರಿಗೆ ಸೌಲಭ್ಯಗಳು ನ್ಯಾಯವಾಗಿ ಸಿಕ್ಕಿದ್ದ ಪತ್ರಿಕೆಗಳು 'ಅಪಪ್ರಚಾರ' ಮಾಡಿ ಜನರನ್ನು ಸಂಚಿಸಲು ಸಾಧ್ಯವೆ?

ಹೀಗಿರುವಾಗ, ತಮ್ಮ ನಾಯಕರು (ಮಂತ್ರಿಗಳಾಗಲಿ, ಶಾಸಕರಾಗಿರಲಿ) ಯಶಸ್ವಿಯಾಗಬೇಕು, ಜನರ ಮೆಚ್ಚಿಗೆ ಪಡೆಯಬೇಕು ಎಂದು ಸ್ಥಳೀಯ ಕಾರ್ಯಕರ್ತರಿಗೆ ಆಸಕ್ತಿ ಇದ್ದರೆ ಈ ಮಾಧ್ಯಮ ಅಗಿಂದಾಗ್ಗೆ ಮಾಡುವ ಟೀಕೆಯನ್ನು, ಕೊಡುವ ಸಲಹೆಗಳನ್ನು ಅರ್ಥ ಮಾಡಿಕೊಂಡು ತಮ್ಮ ನಾಯಕರ ಗಮನಕ್ಕೆ ತರುವುದು ಒಳ್ಳೆಯದು. ಅದು ಬಿಟ್ಟು, ಟೀಕೆಯ ಮಾತು ಪ್ರಕಟವಾದದ್ದೇ ತಪ್ಪು ಎಂದು ಅಸಹನೆ ಪಟ್ಟರೆ ಅಥವಾ 'ನೆಗ್ಲೆಕ್ಟ್' ಮಾಡಿದರೆ ತಾವು ಏನು ಕಳೆದು ಕೊಳ್ಳುತ್ತಾರೆ ಎಂಬುದು ಅರ್ಥವಾಗುವಾಗ ಬಹಳ ತಡವಾಗಿಬಿಡಬಹುದು.

ಈ ಅಂಶಗಳೆಲ್ಲವೂ ಈಗ ಜನತಾ ಪಕ್ಷದ ಕಾರ್ಯಕರ್ತರಿಗೆ ಹೆಚ್ಚು ಅನ್ವಯಿಸುವ ಕಾಲ ಇದು. ಅವರ ಜನ್ಮ ಹಿಂದೆ ಹುಟ್ಟಿ ಅವರಿಗೆ ಗೊತ್ತಿಲ್ಲದೆ ಪ್ರಚಾರ ಪಡೆಯುತ್ತಿರಬಹುದಾದ ಟೀಕೆಗಳು ಪತ್ರಿಕೆಗಳ ಮೂಲಕ ಅವರ ಗಮನಕ್ಕೆ ಬರಬಹುದು; ಅಥವಾ ಪತ್ರಿಕೆಗಳೇ ಮಂತ್ರಿಗಳ, ಶಾಸಕರ ಲೋಪ-ದೋಷ-ವೈಫಲ್ಯಗಳ ಬಗ್ಗೆ ಟೀಕೆ ಮಾಡಬಹುದು. ಅದನ್ನು ಗ್ರಹಿಸಿ ಬೆಳೆಯುವ ವಿಶಾಲ ದೃಷ್ಟಿ ಇರಬೇಕು. ಟೀಕೆಯೇ ಬರಬಾರದು ಎನ್ನುವ ಮನೋಭಾವ ಇದ್ದರೆ ಅದಕ್ಕೆ ತಕ್ಕ, ಪ್ರಶಾಂತವಾದ ಸಾಧನೆ ಇರಬೇಕು. ಎರಡೂ ಇಲ್ಲದಿದ್ದರೆ ಆಗುವ ಪರಿಣಾಮ ಏನು ಎಂಬುದು ಪುನಃ ಜನರನ್ನು ಎದುರಿಸುವಾಗ ಗೊತ್ತಾದೀತು.

—ಸಂಪಾದಕ

ಸಂಖ್ಯೆ. ಎಲ್‌ಆರ್‌ಎಫ್.ಸಿಆರ್. 134:82-83.

ತಹಸೀಲ್ದಾರ್‌ರವರ ಕಾರ್ಯಾಲಯ,
ಕೊಪ್ಪ ತಾಲ್ಲೋಕು, ಕೊಪ್ಪ.
ದಿನಾಂಕ: 12-1-83.

# ಪ್ರ ಕ ಟ ಣೆ

ಈ ಮೂಲಕ ಕೊಪ್ಪ ತಾಲ್ಲೋಕಿಗೆ ಸಂಬಂಧಿಸಿದ ಭೂ ಸುಧಾರಣಾ ಕಾಯಿದೆ 48 (ಎ) ಪ್ರಕಾರ ಭೂಮಿಯನ್ನು ಸರ್ಕಾರಕ್ಕೆ ವಶ ಕೊಟ್ಟವರಿಗೆ (ಗೇಣಿದಾರರಿಗೆ ತೀರ್ಮಾನವಾಗಿರುವಂತೆ) ತಿಳಿಯಪಡಿಸುವುದೇನೆಂದರೆ:

ಇಲ್ಲಿಯವರೆವಿಗೂ ಅಂತಹ ಭೂಮಿಯ ಪರಿಹಾರ ತೆಗೆದುಕೊಳ್ಳದವರು ದಿನಾಂಕ: 31-3-83ರ ಒಳಗೆ ಅರ್ಜಿ ಹಾಕಿ, ಅರ್ಹತೆಗಳನ್ನು ದೃಢಪಡಿಸಿ, ಪರಿಹಾರ ತೆಗೆದುಕೊಳ್ಳತಕ್ಕದ್ದು. ಮೊದಲ ಆದ್ಯತೆಯನ್ನು ವಿಧವೆಯರು, ಅಂಗವಿಕಲರು, ಮಾನಸಿಕ ದೌರ್ಬಲ್ಯಕ್ಕೊಳಗಾದವರು, ಸಣ್ಣ ಹಿಡುವಳಿದಾರರು, ಇವರುಗಳಿಗೆ ನೀಡಲಾಗುವುದು. ಹೆಚ್ಚಿನ ವಿವರಗಳಿಗೆ ಕಛೇರಿಯಲ್ಲಿ ಸಂದರ್ಶಿಸಿ ಮಾಹಿತಿ ಪಡೆಯಬಹುದು. (ಸೂಚನೆ:- ಕೋರ್ಟಿಗೆ ಸಂಬಂಧಿಸಿದ ಕಡತಗಳಿಗೆ ಪರಿಹಾರ ಕೊಡಲಾಗುವುದಿಲ್ಲಾ)

(ಸಹಿ)
ತಹಸೀಲ್ದಾರ್,
ಕೊಪ್ಪ ತಾಲ್ಲೋಕು.

ಹಾಜರುಪಡಿಸಬೇಕಾದ ದಾಖ್ಲೆಗಳು—

1) 1-3-74ರ ಪಹಣಿ ಕಾಪಿ,
2) ವಂಶವೃಕ್ಷ,
3) ಇನ್‌ಕಂಬರೆನ್ಸ್,
4) ವಿಧವೆಯರ, ಅಂಗವಿಕಲರ, ಇತರ—ಆಯಾ ಪ್ರಮಾಣ ಪತ್ರದ ನಕಲು,
5) ಕಂದಾಯ ಬಾಕಿ — ಪ್ರಮಾಣ ಪತ್ರ.

## ಓದುಗರ ಪತ್ರಗಳು

### ಗ್ರಾಮೀಣ ಯುವಜನರ ಪ್ರತಿಭೆ ವಿಕಾಸಕ್ಕೆ ವಿದ್ಯಾರ್ಥಿಗಳ ಅಡ್ಡಗಾಲು

ಕೊಪ್ಪ ತಾ॥ ಯುವ ಮೇಳ ಮತ್ತು ಅದರ ಸಮೀಕ್ಷೆಯ ಬಗ್ಗೆ ನನ್ನ ಅಭಿಪ್ರಾಯ:

ಪ್ರತಿಭೆಗೆ ತಕ್ಕ ಪುರಸ್ಕಾರ.ಬಹುಮಾನ ವಸ್ತ್ರೂ "ಮೊಸಲಾತಿ" ಇದ್ದಿದ್ದರೆ ಲೇಖಕರೇ ಪ್ರಶ್ನಿಸುತ್ತಿರಲಿಲ್ಲವೆ?

ಕಾಲೇಜು ವಿದ್ಯಾರ್ಥಿಗಳು ಈಗೀಗ ಯುವ ಮೇಳದಲ್ಲಿ ಹೆಚ್ಚ ಹೆಚ್ಚು ಪ್ರವೇಶಿಸುತ್ತಿದ್ದಾರೆ. ಇದು ಅಕ್ರಮ.ಅವರಿಗೆ ತಮ್ಮದೇ ಆದ ಅನೇಕ ಕ್ರೀಡಾ ಕೂಟಗಳಲ್ಲಿ ಭಾಗವಹಿಸುವ ಅವಕಾಶಗಳಿರುತ್ತವೆ. ಆದರೂ, ಹಳ್ಳಿಗಾಡಿನ ಯುವ ಜನರಿಗಾಗಿರುವ ಈ ಮೇಳದಲ್ಲಿ ಭಾಗವಹಿಸಿ ಅವರು ಹಳ್ಳಿಯ ಯುವ ಜನರ ಪ್ರತಿಭೆಗೆ ಅಡ್ಡಗಾಲು ಹಾಕುತ್ತಿದ್ದಾರೆ. ಇದು ನಾಚಿಕೆಗೇಡು. ಅವರು ಕ್ರೀಡಾಕೂಟದಲ್ಲಿ ಆಸಕ್ತಿ ಹೊಂದಿದ್ದಾರೇ ಹೊರತು ಈ ಸಂಘಗಳು ನಡೆಸುವ ಸಾಮಾಜಿಕ ಸೇವೆಯಲ್ಲಿ ಭಾಗವಹಿಸುವುದಿಲ್ಲ.

ಮುಂದಕ್ಕೆ ಯುವ ಮೇಳದಲ್ಲಿ ಭಾಗವಹಿಸುವ ಎಲ್ಲರೂ ಯುವ ಜನ ಸಂಘದ ಸದಸ್ಯರು ಹೌದೆಂದೂ, ಹಾಲಿ ಕಾಲೇಜು ವಿದ್ಯಾರ್ಥಿಗಳಲ್ಲವೆಂದೂ ದೃಢೀಕರಣ ಪತ್ರ ಸಲ್ಲಿಸುವ ವ್ಯವಸ್ಥೆ ಮಾಡಬೇಕಾಗುತ್ತದೆ. ಇದು ಅತಿ ಎನ್ನಿಸಿದರೂ ಗ್ರಾಮಾಂತರ ಯುವಜನರ ಪ್ರತಿಭೆ ವಿಕಾಸಕ್ಕೆ ಅವಕಾಶ ದೊರಕಲು ಸೂಕ್ತ ಮಾರ್ಗ ಎಂದು ನನ್ನ ನಂಬಿಕೆ.

—ಹೆಚ್.ಎಸ್.ಕ್ಷೇತ್ರಪಾಲ,
ಕಾಸುವಳ್ಳಿ.

### ಬಿಲಗದ್ದೆ ಶಾಲೆಗೆ ಅಧ್ಯಾಪಕರ ಕೊರತೆ?

ಬಿಲಗದ್ದೆಯ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರೊಬ್ಬರು ಅನಧಿಕೃತವಾಗಿ ತಮಗೆ ಇಷ್ಟಬಂದಷ್ಟು ದಿನ ರಜ ಹಾಕುತ್ತಿದ್ದು ಮಕ್ಕಳ ಪಾಠಕ್ಕೆ ತೊಂದರೆಯಾಗಿದೆ ಎಂಬುದಾಗಿ ಕಾವಳಿ ಲಕ್ಷ್ಮೀನಾರಾಯಣಪ್ಪ ಎಂಬವರು ಬರೆದಿದ್ದ ದೂರಿನ ಬಗ್ಗೆ ಕೊಪ್ಪದ ಸಹಾಯಕ ಶಿಕ್ಷಣಾಧಿಕಾರಿಗಳು ಈ ರೀತಿ ತಿಳಿಸಿದ್ದಾರೆ:

"ಬಿಲಗದ್ದೆ ಶಾಲೆಯಲ್ಲಿ ಒಟ್ಟು ಮಕ್ಕಳು ೧೩೦ ಇದ್ದು ಸರಾಸರಿ ಹಾಜರಾತಿ ೧೦೦ರ ಆಚೀಚೆ ಇರುತ್ತೆ. ಸರ್ಕಾರದ ಕಾನೂನಿನಂತೆ ೪೦ ಮಕ್ಕಳಿಗೆ ಒಬ್ಬ ಅಧ್ಯಾಪಕ ಇರಬೇಕು. ಈ ಶಾಲೆಯಲ್ಲಿ ಸ್ವಲ್ಪ ಹೆಚ್ಚಿನ ಮತ್ತು ಹಂಗಾಮಿ ಸೇರಿ ನಾಲ್ಕು ಜನ ಅಧ್ಯಾಪಕರಿದ್ದು, ಅವರಲ್ಲೊಬ್ಬರು ತೀವ್ರ ಅನಾರೋಗ್ಯದಿಂದಾಗಿ ತಮ್ಮ ಊರಿಗೆ ಸಮೀಪವಾಗಿ ವರ್ಗಾವಣೆ ಕೋರಿದ್ದಾರೆ. ಸದ್ಯಕ್ಕೆ ವರ್ಗಾವಣೆ ಸಾಧ್ಯವಿಲ್ಲದ್ದರಿಂದ ಹಾಗೂ ಅವರಿಗೆ ರಜೆ ಕೊಟ್ಟರೂ ನಿಯಮದ ರೀತ್ಯ ಶಾಲೆಯ ಪಾಠ ಪ್ರವಚನಗಳಿಗೆ ಹೆಚ್ಚಿನ ತೊಂದರೆಯಾಗದಿರುವುದರಿಂದ ಅನುಕಂಪದ ಕಾರಣದ ಮೇಲೆ ಅವರಿಗೆ ರಜ ಕೊಡಲಾಗುತ್ತಿದೆ."

## ಸಿಬ್ಬಂದಿಯ ಕುಂದುಕೊರತೆ ನಿವಾರಣೆ, ದಕ್ಷತೆ ಹೆಚ್ಚಳಕ್ಕೆ

# ಅರಣ್ಯಾಧಿಕಾರಿಯ ಕಳಕಳಿಯ ಕ್ರಮ

ಸಿಬ್ಬಂದಿಯ ಬಗ್ಗೆ ಮೇಲಧಿಕಾರಿಗಳಿಗೆ ದೂರುಗಳು ಬರುತ್ತವೆ. ಲಂಚ, ಕುಡಿತ, ಕೆಲಸದಲ್ಲಿ ನಿರ್ಲಕ್ಷ್ಯ, ಇತರ ದುರ್ನಡತೆಗಳು ಮುಂತಾದುವುಗಳ ಬಗ್ಗೆ ರಾಜ್ಯ ಸರ್ಕಾರದ—ಅದರಲ್ಲೂ ಅರಣ್ಯ ಇಲಾಖೆಯ — ನೌಕರರ ಬಗ್ಗೆ ದೂರುಗಳು ಯಾವಾಗಲೂ ಪ್ರತಿಧ್ವನಿಸುತ್ತಲೇ ಇರುತ್ತವೆ.

ಸಿಬ್ಬಂದಿಗೆ ಬುದ್ಧಿ ಹೇಳಿ, ಅದನ್ನೂ ದೂರು ಕಡಿಮೆ ಮಾಡಬೇಕು. ಇದರ ಜೊತೆಗೆ, ಸಿಬ್ಬಂದಿಗೂ ಎಷ್ಟೋ ಕುಂದು-ಕೊರತೆಗಳಿರಬಹುದಲ್ಲ. ಜನರಿಗೆ ಅವರ ಕಷ್ಟ ಸುಖಗಳ ಬಗ್ಗೆ ಗಮನವೇ ಹೋಗದಷ್ಟು ಮಟ್ಟಿಗೆ ಅವರು ತಮ್ಮ ಹೆಸರು ಕೆಡಿಸಿಕೊಂಡು ಬಿಟ್ಟಿದ್ದಾರೆ.

ಸಿಬ್ಬಂದಿಗೆ ಬುದ್ಧಿವಾದ ಹೇಳುವುದು ಹಾಗೂ ಅವರ ಕಷ್ಟ-ಸುಖ ವಿಚಾರಿಸುವುದು ಎರಡನ್ನೂ ಒಟ್ಟಿಗೆ ಮಾಡುವಂಥ ಸ್ತುತ್ಯ ಹಾಗೂ ಆದರ್ಶದ ಪ್ರಯತ್ನವನ್ನು ಈಚೆಗೆ ಕೊಪ್ಪ ವಿಭಾಗ ಅರಣ್ಯಾಧಿಕಾರಿ ಕೆ.ಸುಂದರ ನಾಯಕ್ ಮಾಡಿದರು.

ಜ. ೧೫ರಂದು ಇಡೀ ವಿಭಾಗದ ಎಲ್ಲ ಗಾರ್ಡ್, ಫಾರೆಸ್ಟರ್, ರೇಂಜರ್‌ಗಳೂ ಕೊಪ್ಪದಲ್ಲಿ ಸಭೆ ಸೇರಿದ್ದರು. ಸಮವಸ್ತ್ರ ಧರಿಸುವುದು ಮೇಲಧಿಕಾರಿಗಳಿಗೆ ಸೆಲ್ಯೂಟ್ ಮಾಡುವುದರಿಂದ ಹಿಡಿದು ಅವರ ಪ್ರತಿಯೊಂದು ನಡತೆ, ಶಿಸ್ತು ಮುಂತಾದುವುಗಳ ಬಗ್ಗೆ ಸುಂದರ ನಾಯಕ್ ತಮ್ಮ ಸಿಬ್ಬಂದಿಗೆ ಎಳೆ ಎಳೆಯಾಗಿ ವಿವರಿಸಿದರು.

ಮೊದಲಿಗೆ, ಈಚೆಗೆ ನಿಧನರಾದ ವೆಂಕಟೇಶ್, ಬೆಳ್ಳಿಯಪ್ಪ ಎಂಬಿಬ್ಬರು ಅರಣ್ಯ ರಕ್ಷಕರಿಗೆ ಗೌರವ, ಸಂತಾಪ ಸೂಚಿಸಿ ಮೌನ ಆಚರಣೆ; ನಂತರ ಎಲ್ಲರ ಪರಿಚಯ; ನಂತರ ಸಿಬ್ಬಂದಿ ಎದುರಿಸುತ್ತಿರುವ ತೊಂದರೆಗಳು, ಕುಂದು ಕೊರತೆಗಳು, ಅವರ ಅವಶ್ಯಕತೆಗಳು, ಮುಂತಾದುವನ್ನು ಪ್ರತಿಯೊಬ್ಬರೂ ಚರ್ಚಿಸಿದರು. ಅನಂತರ ಸರ್ಕಾರದಿಂದ ಅವರಿಗೆ ದೊರೆಯುವ ಸೌಲಭ್ಯಗಳ ಬಗ್ಗೆ ನಾಯಕ್ ವಿವರಿಸಿದರು.

ಮಧ್ಯಾಹ್ನ ಎಲ್ಲರೂ ಒಟ್ಟಿಗೆ ಕುಳಿತು ಊಟವಾದ ನಂತರ ಸಿಬ್ಬಂದಿಯ ಕರ್ತವ್ಯ ಮುಂತಾದುವುಗಳ ಬಗ್ಗೆ ಹಿತವಚನ ಹೇಳಿದರು ಸುಂದರ ನಾಯಕ್.

ಎಲ್ಲರಿಗೂ ಮುದ್ರಿತ ಕಾರ್ಡುಗಳನ್ನೂ, ನಕ್ಷತ್ರ—ಗುಂಡಿ—ಸೀಟಿ – ಹಾಕಿ ಕಂಕುಳಪಟ್ಟಿ ಮುಂತಾದ ಸಮವಸ್ತ್ರದ ಪರಿಕರಗಳನ್ನೂ ಹಂಚಲಾಯಿತು. ಸ್ಥಳದಲ್ಲೇ ಟಿ.ಎ. ಕಾರ್ಡ್ ಸಮವಸ್ತ್ರಗಳನ್ನು ತರಿಸಿ ಕೊಡುವ ಭರವಸೆ ನೀಡಲಾಯಿತು.

ಈ ವಿಭಾಗ ಪ್ರಾರಂಭವಾದ ಮೇಲೆ ಇಂಥದೊಂದು ಸಮಾವೇಶ ಇದೇ ಮೊದಲು. ತಮ್ಮ ಈ ಪ್ರಯತ್ನದ ಬಗ್ಗೆ ಸುಂದರ ನಾಯಕ್ ಹೇಳುತ್ತಾರೆ: "ನನ್ನ ಸಿಬ್ಬಂದಿ ವರ್ತನೆಯ ಸಂದರ್ಭದಲ್ಲಿ ನನ್ನ ಸಮಸ್ಯೆ

(ಇನ್ನೂ ಇದೆ)

## ಚುನಾವಣೆ ಗಲಾಟೆಯಲ್ಲಿ ಗಂಧ ಸಾಗಣೆ ಮಾಡುತ್ತಿದ್ದ
# ಗಂಧ ಕಳ್ಳರ ತಂಡದ ಸೆರೆ; ಗಂಧ ವಶ

ಸ.ರಾ.ಪುರ: ಚುನಾವಣೆಯ ಗಡಿಬಿಡಿಯ ಅವಕಾಶವನ್ನು ಬಳಸಿಕೊಳ್ಳಲು ಹೊರಟ ಗಂಧ ಕಳ್ಳರ ತಂಡವೊಂದಕ್ಕೆ ಆ ಅವಕಾಶವೇ ಕುತ್ತಾಗಿ ಪರಿಣಮಿಸಿದ ಪ್ರಕರಣವೊಂದು ಇಲ್ಲಿಗೆ ಸಮೀಪದಲ್ಲಿ ಈಚೆಗೆ ನಡೆದಿದೆ.

ಜ. ೧–೨ರ ಹೊತ್ತಿಗೆ ಶೆಟ್ಟಿಕೊಪ್ಪದ ಸುತ್ತ ಮುತ್ತ ಗಂಧ ಕಡಿದು ವ್ಯಾನಿಗೆ ತುಂಬಿ ಶಿವಮೊಗ್ಗದ ಕಡೆ ಹೊರಟಾಗ ಕರುಳುಕೊಪ್ಪದ ಬಳಿ ವ್ಯಾನು ಕೈಕೊಟ್ಟಿತು. ಗಂಧವನ್ನು ಅಲ್ಲೇ ಕಾಡಿನಲ್ಲಿ ಖಾಲಿ ಮಾಡಿ ವ್ಯಾನನ್ನು ಒಯ್ದು ಶಿವಮೊಗ್ಗದಲ್ಲಿ ರಿಪೇರಿ ಮಾಡಿಸಿ ತಂದು ಜ.೩ರಂದು ಪುನಃ ಭರ್ತಿಮಾಡಿ ಸಂಜೆ ೫–೬ ಗಂಟೆ ಸಮಯದಲ್ಲಿ ಶಿವಮೊಗ್ಗದ ಕಡೆ ಹೊರಟಿತು ಈ ತಂಡ.

ಚುನಾವಣೆ ಗಲಾಟೆ. ಅರಣ್ಯ ಇಲಾಖೆ ಸಿಬ್ಬಂದಿಗೆ, ವಾಹನಗಳಿಗೆ ಸಹ ಚುನಾವಣೆ ಕಾರ್ಯ. ಜೊತೆಗೆ ಪಕ್ಷವೊಂದರ ಬಾವುಟ ಇದ್ದರಂತೂ ಯಾರೂ ಮಾತಾಡಿಸುವುದಿಲ್ಲ. ಅದಕ್ಕಾಗೇ ಎರಡು ಕಾಂಗ್ರೆ ಬಾವುಟದಿಂದ ವ್ಯಾನಿಗೆ ಅಲಂಕಾರ. ಗಾಜಿಗೆಲ್ಲ ಕಪ್ಪು ಬಣ್ಣ ಹಚ್ಚಿ, ಕಪ್ಪು ಗಾಜಿನ ನೋಟ.

ಆದರೆ ಅವರ ದುರ್ದೃಷ್ಟ! ರೈತ ಸಂಘದವರ ಕಣ್ಣಿಗೆ ವ್ಯಾನು ಬಿತ್ತು. ಚುನಾವಣೆಗೆ ಮೊದಲು ಕಾಂಗ್ರೆಸವರು ಸೀರೆ–ಪಂಚೆ–ಹೆಂಡ ಹಂಚುವುದನ್ನು ತಡೆಯಲು ಹೊಂಚು ಹಾಕಿ ಅವರು ಗಸ್ತು ಹೊರಟಿದ್ದರು. ಅಂದಮೇಲೆ ವ್ಯಾನನ್ನು ಪರೀಕ್ಷಿಸಬೇಕಲ್ಲ. ನೋಡಿದರೆ ಗಂಧ! ಗಲಾಟೆ ಮಾಡಿದರೆ ಎಲ್ಲರೂ ಓಡಿ ತಪ್ಪಿಸಿಕೊಳ್ಳುತ್ತಾರೆ. ಬುದ್ಧಿ ಉಪಯೋಗಿಸಿದರು ಮಣ್ಣಿನ ಮಕ್ಕಳು. ತಂಡದವರ ಕಷ್ಟ ಸುಖ ವಿಚಾರಿಸತೊಡಗಿದರು. ಅವರಲ್ಲೊಬ್ಬ ಎಲ್ಲರ ಕಣ್ಣು ತಪ್ಪಿಸಿ ಮೋಟರ್‌ಸೈಕಲ್ಲಿನಲ್ಲಿ ನ.ರಾ. ಪುರಕ್ಕೆ ಧಾವಿಸಿ, ಇಲಾಖೆಗೆ ಸುದ್ದಿ ಮುಟ್ಟಿಸಿದ.

ತಕ್ಷಣ ವಲಯಾಧಿಕಾರಿ ಸಿಬ್ಬಂದಿಯೊಂದಿಗೆ ಧಾವಿಸಿದರು. ತಂಡದ ಐದು ಜನ ಸೆರೆ ಸಿಕ್ಕರು. ಇಬ್ಬರು ಮಾತ್ರ ತಪ್ಪಿಸಿಕೊಂಡೇ ಬಿಟ್ಟರು. ಸುಮಾರು ೪೦ ಸಾವಿರ ರೂ. ಬೆಲೆಯ ೬೦೮ ಕಿಲೋ ಗಂಧ ವಶವಾಯಿತು. ಟೋಲ್‌ಗೇಟ್ ಮುಂತಾದ ಕಡೆ ಕೊಡಲು ಇಟ್ಟುಕೊಂಡಿದ್ದೆಂದು ಹೇಳಲಾದ ೫೦೦೦ರೂ.ಗಳನ್ನು ಡ್ರೈವರನಿಂದ ಮುಟ್ಟುಗೋಲು ಹಾಕಿಕೊಳ್ಳಲಾಯಿತು.

ಅವರನ್ನೆಲ್ಲ ಇಲ್ಲಿನ ನ್ಯಾಯಾಲಯದಲ್ಲಿ ಹಾಜರು ಪಡಿಸಿ ನ್ಯಾಯಾಂಗ ಸುಪರ್ದಿಗೆ ಕೊಡಲಾಯಿತು. ತಪ್ಪಿಸಿಕೊಂಡ ಇಬ್ಬರಲ್ಲಿ ಕೊಕ್ಕರ್ಣೆಯವನೊಬ್ಬನನ್ನು (ಸೆಟ್ಟಿಕೊಪ್ಪದಲ್ಲಿ ನೆಲೆಸಿದ್ದವನು) ಜ. ೯ರಂದು ಕೊಕ್ಕರ್ಣೆಯಲ್ಲಿ ಕೊಪ್ಪದಿಂದ ಹೋಗಿದ್ದ ಇಲಾಖೆ ಸಿಬ್ಬಂದಿ ಬಂಧಿಸಿದರು. ಶಿವಮೊಗ್ಗದವನಾದ ಇನ್ನೊಬ್ಬನಿಗಾಗಿ ಹುಡುಕಾಟ ನಡೆದಿದೆ.

ಮಹಾರಾಷ್ಟ್ರದ ರಿಜಿಸ್ಟ್ರೇಶನ್ ಹೊಂದಿದ ಈ ವ್ಯಾನು ಮತ್ತು ಅದರ ಮಾಲೀಕನೇ ಆದ ಡ್ರೈವರ್ ಹಿಂದೆ ಸಹ ಶಿಕಾರಿಪುರ ಮುಂತಾದ ಕಡೆಗಳಿಂದ ಗಂಧ ಸಾಗಣೆ ನಡೆಸಿದ್ದಾಗಿ ಒಪ್ಪಿಕೊಂಡಿದ್ದಾನೆ.

ಈ ಚುನಾವಣೆ ಫಲಿತಾಂಶ ಹೀಗೆ 'ಕೈ' ಸುಡುತ್ತೆಂದು ಗೊತ್ತಿದ್ದರೆ ಜನತಾ ಪಕ್ಷದ್ದೇ ಬಾವುಟ ಬಳಸುತ್ತಿದ್ದರೇನೋ! ಕೆಲಸ ಆದರೆ ಸರಿ, ಬಾವುಟ ಯಾವುದಾದರೇನು?!

## ಮಹಿಳೆಯರ ಸಹಕಾರ ಬ್ಯಾಂಕ್: ಸಿದ್ಧತೆ ಪ್ರಗತಿ

ಕೊಪ್ಪ: ಇಲ್ಲಿ ಪ್ರಾರಂಭಿಸಲು ಉದ್ದೇಶಿಸಲಾಗಿರುವ ಮಹಿಳೆಯರ ಸಹಕಾರಿ ಬ್ಯಾಂಕಿಗಾಗಿ ೨ ಸಾವಿರ ರೂ.ಗಳಷ್ಟು ಶೇರು ಹಣ ಸಂಗ್ರಹವಾಗಿದ್ದು ಇಷ್ಟರಲ್ಲೇ ಮಹಿಳಾ/ಯುವತಿ ಮಂಡಳಿಗಳ ಮತ್ತಿತರ ಸಂಬಂಧಿತರ ಸಭೆ ಕರೆದು ಶೇರು ಸಂಗ್ರಹಣೆ ತ್ವರಿತಗೊಳಿಸಿ ಬೇಗನೇ ಬ್ಯಾಂಕಿನ ಪ್ರಾರಂಭಕ್ಕೆ ಯತ್ನಿಸುವುದಾಗಿ ಕ್ಷೇತ್ರಾಭಿವೃದ್ಧಿ ಅಧಿಕಾರಿ ಕೆ.ಬಾಲಣ್ಣ ಗೌಡರು 'ಮುಂಜಾವು' ಪ್ರಶ್ನೆಗೆ ಉತ್ತರಿಸುತ್ತಾ ತಿಳಿಸಿದರು. ಈ ಹಿಂದೆ ಈ ಬ್ಯಾಂಕಿನ ಸ್ಥಾಪನೆ ಬಗ್ಗ 'ಮುಂಜಾವು' ವರದಿ ಪ್ರಕಟಿಸಿದ್ದನ್ನು ಸ್ಮರಿಸಬಹುದು.

ಭೂಮಿ ಅಭಿವೃದ್ಧಿ, ಸಣ್ಣ ವ್ಯಾಪಾರ, ಎತ್ತು–ಗಾಡಿ, ಎಮ್ಮೆ ಮುಂತಾದುವುಗಳಿಗಾಗಿ ಡಿಸೆಂಬರ್ ತಿಂಗಳಲ್ಲಿ ೨೦೬ ಜನರಿಗೆ ಆರ್‌ಡಿಪಿ ಸಾಲ ಕೊಟ್ಟಿರುವುದಾಗಿಯೂ ಬಿಡಿಒ ಅವರು ಹೇಳಿದ್ದಾರೆ.

## ಅರಣ್ಯಾಧಿಕಾರಿಯ ಕಳಕಳಿ

(೩ನೇ ಪುಟದಿಂದ)

ಬಂದ ಹಲವಾರು ಸಂಗತಿಗಳಿಂದಾಗಿ ಇಂಥದೊಂದು ಪ್ರಯತ್ನ ಮಾಡಿದ್ದೇನೆ. ಇದರ ಉಪಯೋಗ ಪಡೆದುಕೊಳ್ಳುವುದೂ ಬಿಡುವುದೂ ಅವರಿಗೆ ಬಿಟ್ಟದ್ದು. ಅವರ ಕುಂದು ಕೊರತೆಗಳ ಪರಿಹಾರಕ್ಕೆ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಸಲಹೆಗಳನ್ನು ದಾಖಲೆ ಮಾಡಿಡುತ್ತೇನೆ. ನಾನೊಂದು ವೇಳೆ ವರ್ಗವಾದರೂ ಬೇರೆಯವರು ಅದನ್ನು ನೆರವೇರಿಸಬಹುದು."

**ನಿಜಕ್ಕೂ ಇದೊಂದು ಅಪರೂಪದ ಪ್ರಯತ್ನ. ಈಗಾಗಲೇ ಅಪಖ್ಯಾತಿಯ ಕೆಸರಲ್ಲಿ ಮುಳುಗಿ ಹೋಗಿರುವ ಸಿಬ್ಬಂದಿ ತಮ್ಮ ಅಧಿಕಾರಿಯ ಈ ಕಳಕಳಿಯ ಸದುಪಯೋಗ ಪಡೆದುಕೊಂಡು ತಮ್ಮ ಘನತೆಯನ್ನು ಹೆಚ್ಚಿಸಿಕೊಳ್ಳಬೇಕು.** "ಅವನೇನೋ ಪ್ರಸಿದ್ಧಿಗೋ ಪ್ರಮೋಶನ್‌ಗೋ ಇದನ್ನು ಮಾಡಿದ" ಅನ್ನುವವರೂ ಇದ್ದಾರು.ಹಾಗಿದ್ದರೂ ಆ ಪ್ರಯತ್ನದ ಉಪಯೋಗವನ್ನಂತೂ ಪಡೆಯಲು ಅಡ್ಡಿಯಿಲ್ಲವಲ್ಲ.



## ತೋಟ ಕಾರ್ಮಿಕರ ಅಪಹರಣ:
# ದಲಿತ ಸಂಘರ್ಷ ಸಮಿತಿ, ಸಿ.ಪಿ.ಐ. ಖಂಡನೆ

ಚಿಕ್ಕಮಗಳೂರು: ಮೂಡಿಗೆರೆ ತಾ|| ದೇವರುಂದದ ಲೇನಾ ಮತ್ತು ಸೇತು ಕಾಫಿ ತೋಟಗಳ ಮುಷ್ಕರ ನಿರತ ಕಾರ್ಮಿಕರನ್ನು ಥಳಿಸಿ ಅಪಹರಿಸಿಕೊಂಡು ಹೋಗಿರುವ ಘಟನೆಯನ್ನು ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಜಿಲ್ಲಾ ಶಾಖೆ ತೀವ್ರವಾಗಿ ಖಂಡಿಸಿ, ತಪ್ಪಿತಸ್ಥ ತೋಟದ ಮಾಲೀಕರು, ಮ್ಯಾನೇಜರ್ ಹಾಗೂ ಅಪಹರಣ ಕಾರರ ಮೇಲೆ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಪೋಲೀಸ್ ಅಧಿಕಾರಿಗಳನ್ನು ಒತ್ತಾಯಿಸಿದೆ.

### ಘಟನೆ

ಸದರಿ ತೋಟಗಳ ಮಾಲೀಕರು, ಈಚೆಗೆ ಆಗಿರುವ ಒಪ್ಪಂದದಂತೆ ಕಾರ್ಮಿಕರಿಗೆ ೮ರೂ.೫೦ಪೈಸೆ ಬದಲು ೭ರೂ.೫೦ಪೈಸೆ ಮಾತ್ರ ಕೂಲಿ ಕೊಡುತ್ತಿದ್ದು, ಇತರೆ ಕೆಲವು ಸೌಲಭ್ಯಗಳನ್ನು ಕೊಟ್ಟಿರಲಿಲ್ಲವೆಂದೂ, ಇದರಿಂದಾಗಿ ಜ. ೧೩ರಿಂದ ಈ ತೋಟಗಳ ೨೧ ಜನ ಕಾರ್ಮಿಕರು ಮುಷ್ಕರ ನಿರತರಾಗಿದ್ದರೆಂದೂ ವರದಿಯಾಗಿದೆ. ಜ. ೧೫ರಂದು ಪಕ್ಕದ ದೇವಾಲದ ಕೆರೆ ಗ್ರಾಮದ ರೈತ ಸಂಘದ ಅಧ್ಯಕ್ಷ ಕೇಶವೇಗೌಡ ಎಂಬವರು ಸುಮಾರು ೪೦ ಜನರೊಂದಿಗೆ ರೈತ ಸಂಘದ ಹಸಿರು ರುಮಾಲು ಧರಿಸಿ ಬಂದು, ಮಾಲೀಕರು ಹೇಳಿದಂತೆ ಕೇಳಲು ಕಾರ್ಮಿಕರಿಗೆ ಬೆದರಿಕೆ ಹಾಕಿದರೆಂದೂ, ತಮ್ಮ ಬೇಡಿಕೆ ಈಡೇರದೆ ಮುಷ್ಕರ ನಿಲ್ಲಿಸಲು ಒಪ್ಪದ ಕಾರ್ಮಿಕರ ಮೇಲೆ ಮರುದಿನ ಲಾರಿಗಳಿಂದ ಹಲ್ಲೆ ನಡೆಸಿ, ಹೆಂಗಸರು–ಮಕ್ಕಳು–ಮುದುಕರೆನ್ನದೆ ಥಳಿಸಿ, ಅವರನ್ನು ಕೂಲಿ ಲೈನುಗಳಿಂದ ಖಾಲಿ ಮಾಡಿಸಿ ಟ್ರಾಕ್ಟರಿನಲ್ಲಿ ತುಂಬಿಸಿಕೊಂಡು ಹೋದರೆಂದೂ ವರದಿಗಳು ತಿಳಿಸಿವೆ. ೭ ಜನ ಕಾರ್ಮಿಕರು ಮಾತ್ರ ತಪ್ಪಿಸಿಕೊಂಡಿದ್ದು ಕಾರ್ಮಿಕ ಮುಂದಾಳು ಕುಮಾರ್‌ಗೆ ತೀವ್ರ ಪೆಟ್ಟಾಗಿದೆಯೆನ್ನಲಾಗಿದೆ. ಮೂರು ದಿನದ ನಂತರ ಕಾರ್ಮಿಕರು ಪತ್ತೆಯಾಗಿದ್ದಾರೆ.

ಈ ಪ್ರಕರಣದ ಬಗ್ಗೆ ಭಾರತ ಕಮ್ಯುನಿಸ್ಟ್ ಪಕ್ಷದ ಜಿಲ್ಲಾ ಕಾರ್ಯದರ್ಶಿ ಬಿ.ಕೆ. ಸುಂದರೇಶ್ ರೈತ ಸಂಘದ ಹೆಚ್.ಎಸ್. ರುದ್ರಪ್ಪ, ಎಲ್.ಡಿ.ಸುಂದರೇಶ್ ಅವರುಗಳಿಗೆ ವಿಷಯ ತಿಳಿಸಿ ಪತ್ರ ಬರೆದಿದ್ದಾರೆ.

### "ದಲಿತರಿಗೆ ಕಿರುಕುಳ ನಿಲ್ಲಲಿ"

"ಈಚಿನ ಚುನಾವಣೆಯಲ್ಲಿ ಕಾಂಗ್ರೆಸ್ ಸೋಲಿಗೆ ದಲಿತರೇ ಕಾರಣವೆಂದು ಆರೋಪಿಸಿ, ರಾಜ್ಯದ ಹಲವೆಡೆ ದಲಿತರಿಗೆ ಕಿರುಕುಳ, ಬೆದರಿಕೆ, ಅಸಭ್ಯ ಬಯ್ಗುಳ ಮುಂತಾದುವು ನಡೆಯುತ್ತಿವೆ. ಆದರೆ ಜನ ಸಾಮಾನ್ಯರಲ್ಲಿ ಪ್ರಜ್ಞೆ ಮೂಡಿದರೆ ಯಾವುದೇ ಪಕ್ಷ ಸೋಲಬಹುದು ಎಂಬ ಪಾಠವನ್ನು ಈ ಫಲಿತಾಂಶದಿಂದ ಅರ್ಥಮಾಡಿಕೊಂಡು ದಲಿತರಿಗೆ ಕಿರುಕುಳ ಕೊಡುವುದು ನಿಲ್ಲಿಸಬೇಕು" ಎಂದು ದ.ಸಂ.ಸ. ಪ್ರಕಟಣೆಯಲ್ಲಿ ತಿಳಿಸಿದೆ.

## ಸೀಮೆಎಣ್ಣೆ ಹಂಚಿಕೆ: ತಹಸೀಲ್ದಾರರ ಹೇಳಿಕೆ

ಕೊಪ್ಪ: ಇಲ್ಲಿ ಸೀಮೆಎಣ್ಣೆ ವಿತರಣೆ ಬಗ್ಗೆ ದೂರುಗಳು ಬರುತ್ತಿವೆ. ಆದರೆ ಸೀಮೆಎಣ್ಣೆ ಸರಬರಾಜು ಸಾಕಷ್ಟಿದ್ದು, ಯಾವುದೇ ಅಂಗಡಿಯವರಾಗಲಿ, ಪಡಿತರ ಕಾರ್ಡನ್ನು ಒತ್ತಾಯಿಸದೆ ಹಾಗೂ ಕಡಿತ ಮಾಡದೆ, ದೂರುಗಳಿಗೆ ಅವಕಾಶವಿಲ್ಲದಂತೆ ಸೀಮೆಎಣ್ಣೆ ಮಾರಬೇಕು ಎಂಬುದಾಗಿ ತಹಸೀಲ್ದಾರ್ ಹೆಚ್.ಎಂ.ನಾಗಪ್ಪ ತಿಳುವಳಿಕೆ ನೀಡಿದ್ದಾರೆ.

## ಬಳಕೆದಾರರ ಸಂಘಟನೆ ಸಭೆ

(೧ನೇ ಪುಟದಿಂದ)

ಕೆದಾರರ) ಹಿತ ರಕ್ಷಿಸುವಲ್ಲಿ ಬಳಕೆದಾರರ ಸಂಘಟನೆಗಳ ಉಪಯುಕ್ತತೆ ಮತ್ತು ಅಗತ್ಯಗಳನ್ನು ಡಾ|| ಶಾನಭಾಗ್ ಹಲವಾರು ದೃಷ್ಟಾಂತಗಳ ಮೂಲಕ ವಿವರಿಸಿದರು.

ಇಂಥ ಸಂಘಟನೆಯ ಗುರಿ 'ಸೇಡು' ಅಲ್ಲ; ಬದಲು, ತಮ್ಮ ಹಕ್ಕುಗಳ ಬಗ್ಗೆ (ಹಾಗೂ ಕ್ರಮೇಣ ತಮ್ಮ ಜವಾಬ್ದಾರಿ ಕರ್ತವ್ಯಗಳ ಬಗ್ಗೆ ಸಹ) ಜನರಿಗೆ ಶಿಕ್ಷಣ ನೀಡುವುದು, ಹಾಗೂ ತನ್ನ ಹಕ್ಕಿನ ರಕ್ಷಣೆಗಾಗಿ ಬಳಕೆದಾರ ನಡೆಸುವ ಹೋರಾಟದಲ್ಲಿ ಬೆಂಬಲ ಹಾಗೂ ಮಾರ್ಗದರ್ಶನ ನೀಡುವುದು—ಎಂಬುದನ್ನು ಡಾ||ಶಾನಭಾಗ್ ಒತ್ತಿ ಹೇಳಿದರು.

ಇಲ್ಲಿ 'ಬಳಕೆದಾರರ ವೇದಿಕೆ'ಯ ಶಾಖೆಯನ್ನು ಪ್ರಾರಂಭಿಸಲು ಉತ್ಸಾಹಿಗಳು ತೀರ್ಮಾನಿಸಿದ್ದು, ಜ. ೨೩ರ ಭಾನುವಾರ ಮ. ೩ ಗಂಟೆಗೆ ಪುರಭವನದ ಹುಲ್ಲುಹಾಸಿನ ಮೇಲೆ ಸಭೆ ಸೇರಿ, ಕೆಲಸದ ಜವಾಬ್ದಾರಿ ಹೊರಬಲ್ಲವರ ಸಮಿತಿಯನ್ನು ರಚಿಸಲಾಗುವುದು. ಶೃಂಗೇರಿಯಲ್ಲೂ ವೇದಿಕೆಯ ಸ್ಥಾಪನೆಗೆ ಪ್ರಯತ್ನಗಳು ನಡೆಯುತ್ತಿವೆ.

['ಬಳಕೆದಾರರ ವೇದಿಕೆ'ಯ ಕಾರ್ಯವಿಧಾನ ಮುಂತಾದುವುಗಳ ಬಗ್ಗೆ ವಿವರವಾಗಿ ಪರಿಚಯ ಮಾಡಿಕೊಡುವ ಲೇಖನ ಸದ್ಯದಲ್ಲೇ ಪ್ರಕಟವಾಗುವುದು. —**ಸಂ.**]

### ಓದುಗರಲ್ಲಿ

ಈ ಚಿಕ್ಕ ಪತ್ರಿಕೆ ನಿಮಗೆ ಈಗಾಗಲೇ ಮೆಚ್ಚಿಗೆಯಾಗಿರಬಹುದು. ನಿಮ್ಮ ಚಂದಾ ಹಣವೇ ಇದರ ಜೀವಾಳ. ಆದ್ದರಿಂದ ದಯವಿಟ್ಟು ಕೂಡಲೇ ಚಂದಾ ಹಣವನ್ನು ಮನಿ ಆರ್ಡರ್ ಅಥವಾ ಬ್ಯಾಂಕಿನ 'ಎಂ.ಟಿ.' ಮೂಲಕ ಕಳಿಸಬೇಕಾಗಿ ವಿನಂತಿ.

ಚಂದಾದರ: ವಾರ್ಷಿಕ — ೨೦ ರೂ.
ಅರ್ಧವಾರ್ಷಿಕ — ೧೨ ರೂ.
ಆಜೀವ — ೨೦೦ ರೂ.

ವಿಳಾಸ: **ಸಿರಿಮನೆನಾಗರಾಜ್,**
ಸಂಪಾದಕ,'ಮುಂಜಾವು'ವಾರ ಪತ್ರಿಕೆ
ಕೊಪ್ಪ, ಚಿಕ್ಕಮಗಳೂರು ಜಿಲ್ಲೆ.
ಬ್ಯಾಂಕ್ ಖಾತೆ ಸಂಖ್ಯೆ: 10756,
ಸಿಂಡಿಕೇಟ್ ಬ್ಯಾಂಕ್, ಕೊಪ್ಪ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
**ಸಿರಿಮನೆ ನಾಗರಾಜ್.**
ಅಚ್ಚು : ದೀಪಪ್ರಭೆ ಅಚ್ಚುಕೂಟ, ಕೊಪ್ಪ